KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೫, ೨೦೦೯ (ಆಶ್ವಯುಜ ೨೩, ಶಕ ವರ್ಷ ೧೯೩೧) | ಸಂಚಿಕೆ ೪೧ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೊಪ್ಪಳ**

**ಅಧ್ಯಕ್ಷರು ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಕೊಪ್ಪಳ**

**ಅಧಿಸೂಚನೆ**

**ಸಂ. ಕಂದಾಯ/ಸಿಬ್ಬಂದಿ–1/158/2008–09, ದಿನಾಂಕ: 22ನೇ ಸೆಪ್ಟೆಂಬರ್ 2009**

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 30–10–2009**

ಕೊಪ್ಪಳ ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ (36) ಗ್ರಾಮಲೆಕ್ಕಿಗರ ಹುದ್ದೆಗಳಿಗೆ ವರ್ಗೀಕರಣ ಮತ್ತು ಮೀಸಲಾತಿ ಅನ್ವಯ ಕರ್ನಾಟಕ ನಾಗರಿಕ ಸೇವೆಗಳು (Revenue subordinate Branch) (Cadre & Recruitment) (Amendment) ನಿಯಮಗಳು 2008 ನಿಯಮ 2 ರ ಅನ್ವಯ ನೇಮಕಾತಿಯನ್ನು ಮಾಡಲು ಅರ್ಹ ಅಭ್ಯರ್ಥಿಗಳಿಂದ ಪ್ರಾಧಿಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ. ಈ ನೇಮಕಾತಿಯಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಅವರು ಗಳಿಸಿರುವ ಅಂಕಗಳನ್ನು ಆಧರಿಸಿ ಅರ್ಹತಾನುಸಾರ ಮತ್ತು ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗಳಿಗೆ ಅನುಗುಣವಾಗಿ ಆಯ್ಕೆ ಮಾಡಲಾಗುತ್ತದೆ.

**ನಿಬಂಧನೆಗಳು**

1. ಈ ನೇಮಕಾತಿಯು ಗ್ರಾಮಲೆಕ್ಕಿಗರ ಹುದ್ದೆಗೆ ಮಾತ್ರ ಅನ್ವಯಿಸುತ್ತದೆ.

2. ಅರ್ಜಿ ಶುಲ್ಕವನ್ನು ಪ.ಜಾ/ಪ.ಪಂ/ಮಾಜಿ ಸೈನಿಕರು/ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ರೂ.100/– ಹಾಗೂ ಇತರೆ ಅಭ್ಯರ್ಥಿಗಳಿಗೆ ರೂ.200/– ಅಭ್ಯರ್ಥಿಗಳು ಅರ್ಜಿಯನ್ನು ಪಡೆಯುವ ವೇಳೆ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಜಿಲ್ಲಾಧಿಕಾರಿಗಳು ಕೊಪ್ಪಳ ಜಿಲ್ಲೆ ಕೊಪ್ಪಳ ಇವರ ಹೆಸರಿಗೆ ಖರೀದಿಸಿದ ಡಿ.ಡಿ.ಯನ್ನು ಸಲ್ಲಿಸಿ ಅರ್ಜಿಯನ್ನು ಪಡೆಯಬಹುದು.

3.) **1) ಅರ್ಜಿಗಳನ್ನು ಸ್ವೀಕರಿಸುವ ದಿನಾಂಕ:01–10–2009 ರಿಂದ ಸರಕಾರಿ ರಜಾದಿನ ಹೊರತುಪಡಿಸಿ ಕಚೇರಿ ವೇಳೆಯಲ್ಲಿ.**

**2) ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 30–10–2009 ಸಾಯಂಕಾಲ 5–30 ಗಂಟೆ ಒಳಗಾಗಿ.**

4. ಅರ್ಜಿ ನಿಗದಿತ ನಮೂನೆಯ ಮೂಲ ಪ್ರತಿಯಲ್ಲಿಯೇ ಇರಬೇಕು. ಜಿಲ್ಲಾಧಿಕಾರಿಗಳು ಕೊಪ್ಪಳ ಇವರ ಕಚೇರಿಯಿಂದಲೇ ಪಡೆಯಬೇಕು. (ಜೆರಾಕ್ಸ್ ಅರ್ಜಿ ಸಲ್ಲಿಸುವಂತಿಲ್ಲ)

5. ಆಯ್ಕೆ ದಿನಾಂಕದಂದು ಕೊಪ್ಪಳ ಜಿಲ್ಲೆಯಲ್ಲಿರುವ ಗ್ರಾಮಲೆಕ್ಕಿಗರ ಖಾಲಿ ಇರುವ ಹುದ್ದೆಗಳಿಗೆ, ರೋಸ್ಟರ್ ಮತ್ತು ಮೆರಿಟ್ ಆಧಾರದ ಮೇಲೆ ನೇಮಕಾತಿ ಮಾಡಲಾಗುವುದು.

6. ನೇಮಕಾತಿ ಸಮಿತಿಯ ಮೂಲಕ ಮಾತ್ರ ಈ ನೇಮಕಾತಿ ಪ್ರಕ್ರಿಯೆ ನಡೆಯುತ್ತಿದ್ದು, ಯಾವುದೇ ವ್ಯಕ್ತಿಗಳ ಅಥವಾ ಸಂಸ್ಥೆಗಳ ಆಸೆ ಆಮಿಷಗಳಿಗೆ ಒಳಗಾಗದಿರಲು ತಿಳುವಳಿಕೆ ನೀಡಿದೆ.

7. ಸರಕಾರಿ ರಜಾ ದಿನಗಳಂದು ಅರ್ಜಿ ನೀಡಲಾಗುವುದಿಲ್ಲ ಮತ್ತು ಸ್ವೀಕರಿಸಲಾಗುವುದಿಲ್ಲ.

8. ಭರ್ತಿ ಮಾಡಿದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಅಂಚೆ ಮೂಲಕವಾಗಲಿ ಅಥವಾ ಕೊರಿಯರ್ ಮೂಲಕವಾಗಲಿ ಕಳುಹಿಸಬಾರದು.

9. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ.

10. ಅರ್ಜಿಗಳನ್ನು ಸ್ವೀಕರಿಸುವ ದಿನಾಂಕದಂದು ಸರಕಾರದ ಅಧಿಸೂಚನೆ ಸಂಖ್ಯೆ:ಆರ್‌ಡಿ/299/ ಬಿಎಸ್‌ಸಿ/2006 ದಿನಾಂಕ: 24–07–2009 ರ ಮೂಲಕ ಪಿ.ಯು.ಸಿ ಅಥವಾ 12ನೇ ವರ್ಗ ಪರೀಕ್ಷೆ ಪಾಸಾಗಿರತಕ್ಕದ್ದು. (ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಮೇಲಿನ ನಿಗದಿತ ವಿದ್ಯಾರ್ಹತೆಯ ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ)

11. ಹುದ್ದೆಗಳ ವರ್ಗೀಕರಣ ಈ ರೀತಿ ಇರುತ್ತದೆ.

| ಕ್ರಮ ಸಂಖ್ಯೆ | ಮೀಸಲಾತಿ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಅಂಗವಿಕಲರು | ಯೋಜನಾ ನಿರಾಶ್ರಿತರು | ಕನ್ನಡ ಮಾಧ್ಯಮ | ಒಟ್ಟು |
|---|---|---|---|---|---|---|---|---|---|
| 1 | ಪ.ಜಾ. | 1 | 2 | 1 | – | 1 | – | – | 5 |
| 2 | ಪ.ಪಂ. | 1 | – | – | – | – | – | – | 1 |
| 3 | ಪ್ರ.ವರ್ಗ–1 | 1 | – | – | – | – | – | – | 1 |
| 4 | ಪ್ರ.ವರ್ಗ–2ಎ | 1 | 2 | 1 | – | 1 | – | – | 5 |
| 5 | ಪ್ರ.ವರ್ಗ–2ಬಿ | 1 | 1 | – | – | – | – | – | 2 |
| 6 | ಪ್ರ.ವರ್ಗ–3ಎ | 1 | 1 | – | – | – | – | – | 2 |
| 7 | ಪ್ರ.ವರ್ಗ–3ಬಿ | 1 | 1 | – | – | – | – | – | 2 |
| 8 | ಸಾಮಾನ್ಯ | 3 | 6 | 5 | 1 | 1 | 1 | 1 | 18 |
| **ಒಟ್ಟು** | | **10** | **13** | **7** | **1** | **3** | **1** | **1** | **36** |

**12. ಗ್ರಾಮಲೆಕ್ಕಿಗರ ವೇತನ ಶ್ರೇಣಿ**

**ರೂ.5800–100–6000–125–6500–150–7100–175–7800–200–8600–225–9500–250–10500**

**13. ವಯೋಮಿತಿ:–** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ)ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ)ಗರಿಷ್ಠ ವಯೋಮಿತಿ ವಿವಿಧ ವರ್ಗಗಳಿಗೆ ಈ ಕೆಳಗಿನಂತೆ ಇರುತ್ತದೆ.

| | |
|---|---|
| 1. ಸಾಮಾನ್ಯ ವರ್ಗ | 35 ವರ್ಷ |
| 2. 2ಎ, 2ಬಿ, 3ಎ, 3ಬಿ | 38 ವರ್ಷ |
| 3. ಪ.ಜಾ/ಪ.ಪಂಗಡ/ ಪ್ರ.ವರ್ಗ–1 | 40 ವರ್ಷ |
| 4. ವಿಧವೆಯರು, ಅಂಗವಿಕಲರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| 5. ಮಾಜಿ ಸೈನಿಕರು | ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |

14. ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು/ಚಾಲ್ತಿಯಲ್ಲಿರಬೇಕು. ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

15. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಸಂಬಂಧಪಟ್ಟ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು.

16. ಗ್ರಾಮೀಣ ಮೀಸಲಾತಿಯನ್ನು ಕೋರಿರುವ ಪ.ಜಾತಿ/ಪ.ಪಂ/ಪ್ರ.ವರ್ಗ–1, 2ಎ, 2ಬಿ, 3ಎ, 3ಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

17. ಯೋಜನೆಗಳಿಂದ ನಿರ್ವಸತಿಗರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರ ಪಡೆದಿರಬೇಕು.

18. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರದ ಉದ್ಧೃತಭಾಗವನ್ನು (Extract of Cummulative Record)ಲಗತ್ತಿಸತಕ್ಕದ್ದು. ಈ ದಾಖಲೆಗಳಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ನೇಮಕಾತಿ ಪ್ರಾಧಿಕಾರ ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

19. ಪ.ಜಾತಿ/ಪ.ಪಂ/ಪ್ರ.ವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ./ಇ/ಎಫ್/ ನಲ್ಲಿ ತಹಶೀಲ್ದಾರರವರಿಂದ ಪಡೆದಿರುವ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು. ಜಾತಿ ಅಡಿಯಲ್ಲಿ ಆಯ್ಕೆಯಾಗುವ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ)ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

20. ನೇಮಕಾತಿ ಪ್ರಾಧಿಕಾರದ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ಪ್ರಾಧಿಕಾರವು ಹೊಣೆಯಾಗುವುದಿಲ್ಲ.

21. ನೇಮಕಾತಿ ಪ್ರಕ್ರೀಯೆ ಬಗ್ಗೆ ಯಾವುದೇ ರೀತಿಯ ವಾದ ವಿವಾದಗಳಿಗೆ ಆಸ್ಪದವಿರುವುದಿಲ್ಲ. ಎಲ್ಲಾ ರೀತಿಯ ನಿಯಂತ್ರಣಾಧಿಕಾರವನ್ನು ಪ್ರಾಧಿಕಾರ ಕಾಯ್ದಿರಿಸಿಕೊಂಡಿದೆ.

22. ಅಭ್ಯರ್ಥಿಗಳು ಪಡೆದಿರುವ ಶೇಕಡಾವಾರು ಅಂಕಗಳ ಆಧಾರದ ಹಾಗೂ ಮೀಸಲಾತಿ ಆಧಾರದ ಮೇಲೆ ಆಯ್ಕೆಯನ್ನು ಮಾಡಲಾಗುವುದು ಮತ್ತು ಸರಕಾರದ ಆದೇಶದ ಸಂಖ್ಯೆ:ಡಿಪಿಎಆರ್/26/ಎಸ್.ಬಿ.ಸಿ/2002 ದಿನಾಂಕ:11–04–2003 ಹಾಗೂ ಕಾಲಕಾಲಕ್ಕೆ ಆಗಿರುವ ತಿದ್ದುಪಡಿಗಳನ್ವಯ ಆಯ್ಕೆ ಮಾಡಲಾಗುವ ಸಂಖ್ಯೆಗೆ ಶೇ.10 ರ ಅನುಪಾತದಲ್ಲಿ ಅಧಿಕ ಆಯ್ಕೆ ಪಟ್ಟಿಯನ್ನು ತಯಾರಿಸಿ ರಾಜ್ಯಪತ್ರದಲ್ಲಿ ಪ್ರಕಟಿಸಲಾಗುವುದು ಮತ್ತು ಆಯ್ಕೆ ಹೊಂದಿದ ಅಭ್ಯರ್ಥಿಗಳ ಪಟ್ಟಿಯನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿ, ಉಪ ವಿಭಾಗಾಧಿಕಾರಿಗಳ ಕಚೇರಿ ಹಾಗೂ ಎಲ್ಲಾ ತಾಲೂಕು ಕಚೇರಿಗಳ ಸೂಚನಾ ಫಲಕದಲ್ಲಿ ಪ್ರಚುರ ಪಡಿಸಲಾಗುವುದು.

23. ಆಯ್ಕೆ ಪಟ್ಟಿಯಲ್ಲಿ ಕಂಡುಬರುವ ಅಭ್ಯರ್ಥಿಗಳು ನೇಮಕಾತಿಯನ್ನು ಹಕ್ಕು ಎಂದು ಪರಿಗಣಿಸುವಂತಿಲ್ಲ.

24. ನೇಮಕಾತಿ ಆದೇಶವನ್ನು ಪಡೆದ ಅಭ್ಯರ್ಥಿಗಳು ನೇಮಕಾತಿ ಆದೇಶದಲ್ಲಿ ತಿಳಿಸಿದ ನಿಗದಿತ ಅವಧಿಯ ಒಳಗೆ ಕರ್ತವ್ಯದ ಮೇಲೆ ಹಾಜರಾಗದಿದ್ದಲ್ಲಿ ಸದರಿ ಹುದ್ದೆಗಳನ್ನು ಅಧಿಕ ಪಟ್ಟಿಯಲ್ಲಿರುವ ಅಭ್ಯರ್ಥಿಗಳಿಂದ ತುಂಬಲಾಗುವುದು.

25. ಅಭ್ಯರ್ಥಿಗಳು ಕಂಪ್ಯೂಟರ್ ಜ್ಞಾನ ಹೊಂದಿರುವುದು ಹೆಚ್ಚುವರಿ ಅರ್ಹತೆ ಎಂದು ಆದ್ಯತೆ ನೀಡಲಾಗುವುದು.

**26. ಅರ್ಹತಾ ಷರತ್ತುಗಳು.**

1. ಭಾರತೀಯ ನಾಗರೀಕನಾಗಿರತಕ್ಕದ್ದು.

2. ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

3. ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

27. ಈ ಕೆಳಕಂಡ ದಾಖಲಾತಿಗಳನ್ನು ಅರ್ಜಿಯ ಜೊತೆ ಲಗತ್ತಿಸಿರತಕ್ಕದ್ದು.

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯಾದ ಪಿ.ಯು.ಸಿ ಅಥವಾ 12ನೇ ತರಗತಿ ಪಾಸಾದ ವಿದ್ಯಾರ್ಹತೆಯ ಅಂಕಪಟ್ಟಿ.

2) ಜನ್ಮದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ವರ್ಗಾವಣೆಯ ಪ್ರಮಾಣ ಪತ್ರ(ಟಿ.ಸಿ)/ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತಭಾಗ (Extract of Cumulative Record)

**ಮೀಸಲಾತಿ ಹಾಗೂ ವಯೋಮಿತಿ ರಿಯಾಯತಿ ಕೋರಿದ್ದಲ್ಲಿ ಹಾಜರುಪಡಿಸಬೇಕಾದ ಪ್ರಮಾಣಪತ್ರಗಳು:**

ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ/ಮುಕ್ತಿಹೊಂದಿದ ಬಗೆಗಿನ ಪ್ರಮಾಣ ಪತ್ರ.

ಆ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್/ ನಲ್ಲಿ ತಹಶೀಲ್ದಾರರವರಿಂದ ಪಡೆದಿರುವ ಪ್ರಮಾಣ ಪತ್ರ.

ಇ) ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಅರ್ಜಿಯಲ್ಲಿನ ನಿಗದಿತ ಅಂಕಣವನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದಿಂದ ಭರ್ತಿ ಮಾಡಿ ನಿಗದಿತ ದಿನಾಂಕದೊಳಗೆ ಸಲ್ಲಿಸತಕ್ಕದ್ದು.

ಈ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಿಸಿದ ತಹಶೀಲ್ದಾರರವರಿಂದ ಪಡೆದಿರತಕ್ಕದ್ದು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ)

ಉ) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.

ಊ) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

ಋ) ನೇಮಕಾತಿ ಕೋರಿ ಅರ್ಜಿ ಸಲ್ಲಿಸುವ ಅರ್ಜಿದಾರರಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.

(ಈ) ಮೇಲಿನ ಅರ್ಹತೆ, ಮೀಸಲಾತಿ ಇತ್ಯಾದಿಗಳನ್ನು ನೇಮಕಾತಿ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದ ನಂತರವೇ ಅಭ್ಯರ್ಥಿಗಳನ್ನು ಜೇಷ್ಠತೆ ಮತ್ತು ಮೀಸಲಾತಿ ಹಾಗೂ ಮೆರಿಟ್ ಆಧಾರದ ಮೇಲೆ ಪರಿಗಣಿಸಲಾಗುವುದು).

**28 ಪ್ರಮುಖ ಸೂಚನೆಗಳು.**

1) ಅಭ್ಯರ್ಥಿಗಳು ತಮ್ಮ ಮಾಹಿತಿಗಾತಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

2) ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನ್ ಮಾಡುವುದರಿಂದ ಅರ್ಜಿಗಳನ್ನು ಮಡಿಚಬಾರದು ಹಾಗೂ ಪಿನ್ ಮಾಡಬಾರದು ಮತ್ತು ಯಾವುದೇ ರೀತಿ ಹಾಳು ಮಾಡಬಾರದು.

3) ಒಬ್ಬನೇ ಅಭ್ಯರ್ಥಿ ಒಂದಕ್ಕಿಂತ, ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಯಾವುದಾದರೂ ಒಂದು ಅರ್ಜಿಯನ್ನು ಮಾತ್ರ (ಕ್ರಮಬದ್ಧವಾಗಿದ್ದಲ್ಲಿ)ಪರಿಗಣಿಸಲಾಗುವುದು. ಈ ವಿಚಾರದಲ್ಲಿ ನೇಮಕಾತಿ ತೀರ್ಮಾನವೇ ಅಂತಿಮ. ಇದರಿಂದ ಅಭ್ಯರ್ಥಿಗಳಿಗೆ ಅನಾನುಕೂಲವಾದಲ್ಲಿ ನೇಮಕಾತಿ ಪ್ರಾಧಿಕಾರ ಹೊಣೆಯಾಗುವುದಿಲ್ಲ.

4) ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಡೆದಿರುವ ಮಾಹಿತಿ ವಿವರವನ್ನು ಅಂತಿಮ ಆಯ್ಕೆಪಟ್ಟಿ ಪ್ರಕಟವಾಗುವವರೆಗೂ ಸುರಕ್ಷಿತವಾಗಿಟ್ಟುಕೊಳ್ಳತಕ್ಕದ್ದು. ಈ ಪುಸ್ತಕದಲ್ಲಿ ಅರ್ಜಿಯನ್ನು ಭರ್ತಿ ಮಾಡುವ ವಿಧಾನ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆ, ಮೀಸಲಾತಿಯ (Horizontal & Veritical Reservations) ವಿಶ್ಲೇಷಣೆ ಇತ್ಯಾದಿ ವಿಷಯಗಳ ಬಗ್ಗೆ ಕೂಲಂಕುಷವಾಗಿ ವಿವರಿಸಿದ್ದು, ಅವುಗಳನ್ನು ಅಭ್ಯರ್ಥಿಗಳು ಗಮನವಿಟ್ಟು ಓದಿಕೊಳ್ಳತಕ್ಕದ್ದು.

5) ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಅಭ್ಯರ್ಥಿಯು ಅರ್ಜಿಯಲ್ಲಿ ನಮೂದಿಸುವ ಮೀಸಲಾತಿ, ಜನ್ಮದಿನಾಂಕ, ವಿದ್ಯಾರ್ಹತೆ, ಹಾಗೂ ವಯೋಮಿತಿ ಸಡಿಲಿಕೆ ಈ ಬಗ್ಗೆ ಆನಂತರದಲ್ಲಿ ಬದಲಾವಣೆ ಕುರಿತಂತೆ ಸಲ್ಲಿಸುವ ಯಾವುದೇ ಕೋರಿಕೆಯನ್ನು ಪುರಸ್ಕರಿಸುವುದಿಲ್ಲ.

6) ನೇಮಕಾತಿ ಪ್ರಾಧಿಕಾರವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ.

7) **ದುರ್ನಡತೆ**:– ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು/ಸುಳ್ಳು ಹೇಳಿಕೆ ನೀಡಿರುವನೆಂದು ತಿಳಿದುಬಂದಲ್ಲಿ ಕ್ರಿಮಿನಲ್ ವ್ಯವಹಾರಗಳಿಗೆ ಒಳಪಡಿಸಲಾಗುತ್ತದೆ.

29. ಅಧಿಸೂಚನೆ ಹೊರಡಿಸಿದ ಹುದ್ದೆಗಳ ಸಂಖ್ಯೆ ಹೆಚ್ಚು ಅಥವಾ ಕಡಿಮೆ ವ್ಯತ್ಯಾಸಕ್ಕೆ ಒಳಪಟ್ಟಿರುತ್ತದೆ.

**ಚಕ್ರವರ್ತಿ ಮೋಹನ್ ಭಾ.ಆ.ಸೇ**

ಜಿಲ್ಲಾಧಿಕಾರಿಗಳು ಹಾಗೂ

ಗ್ರಾಮಲೆಕ್ಕಿಗರ ನೇಮಕಾತಿ ಪ್ರಾಧಿಕಾರ, ಕೊಪ್ಪಳ ಜಿಲ್ಲೆ, ಕೊಪ್ಪಳ

**ಕಂದಾಯ ಇಲಾಖೆ**

**ಗ್ರಾಮಲೆಕ್ಕಿಗರ ಹುದ್ದೆಗಾಗಿ ಅರ್ಜಿ**

**ಅರ್ಜಿ ಸಂಖ್ಯೆ:**

ಇತ್ತೀಚಿನ ಭಾವ ಚಿತ್ರ ಅಂಟಿಸಲು ಸ್ಥಳ

ಇವರಿಗೆ,
ಅಧ್ಯಕ್ಷರು,
ಗ್ರಾಮಲೆಕ್ಕಾಧಿಕಾರಿಗಳ ಆಯ್ಕೆ ಮತ್ತು
ನೇರ ನೇಮಕಾತಿ ಪ್ರಾಧಿಕಾರ ಹಾಗೂ
ಜಿಲ್ಲಾಧಿಕಾರಿಗಳು, ಕೊಪ್ಪಳ.

ಮಾನ್ಯರೆ,

ತಮ್ಮ ಕಾರ್ಯಾಲಯದ ಅಧಿಸೂಚನೆ ಸಂಖ್ಯೆ: ಕಂದಾಯ: ಸಿಬ್ಬಂದಿ–1/ 158/ 2008–09 ದಿನಾಂಕ: 26.09.2009ರ ಪ್ರಕಾರ ತಮ್ಮ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮ ಲೆಕ್ಕಿಗರ ಹುದ್ದೆಗಾಗಿ ನನ್ನ ಅರ್ಜಿಯನ್ನು ಇತ್ತೀಚಿನ ಭಾವಚಿತ್ರದೊಂದಿಗೆ ಈ ಕೆಳಕಂಡ ಮಾಹಿತಿಯೊಂದಿಗೆ ಸಲ್ಲಿಸುತ್ತಿದ್ದೇನೆ.

| | | |
|---|---|---|
| 1 | ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಬಿಡಿ ಅಕ್ಷರದಲ್ಲಿ) | |
| 2 | ತಂದೆ / ತಾಯಿ/ ಗಂಡನ/ ಪೋಷಕರ ಹೆಸರು | |
| 3 | ಎ) ಅಭ್ಯರ್ಥಿಯ ಅಂಚೆ ವಿಳಾಸ (ಪತ್ರ ವ್ಯವಹಾರಕ್ಕಾಗಿ)<br><br>ಬಿ) ಖಾಯಂ ವಿಳಾಸ | |
| | ಸಿ) ದೂರವಾಣಿ ಸಂಖ್ಯೆ: | |
| 4 | ಅಭ್ಯರ್ಥಿಯು ಪ.ಜಾ./ಪ.ಪಂ. ಕ್ಕೆ ಸೇರಿರುವ ಬಗ್ಗೆ ತಹಶೀಲ್ದಾರರು ನೀಡಿದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. | ಜಾತಿ :<br>ಉಪಜಾತಿ : |
| 5 | ಅಭ್ಯರ್ಥಿಯು ಹಿಂದುಳಿದ ವರ್ಗ ಪ್ರವರ್ಗಕ್ಕೆ ಸೇರಿರುವವರೆ? ತಹಶೀಲ್ದಾರರು ನೀಡಿದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. | ಪ್ರ ವರ್ಗ I<br>ಪ್ರ ವರ್ಗ II ಎ<br>ಪ್ರ ವರ್ಗ II ಬಿ<br>ಪ್ರ ವರ್ಗ III ಎ<br>ಪ್ರ ವರ್ಗ III ಬಿ |
| 6 | ಜನ್ಮ ದಿನಾಂಕ ಹಾಗೂ ವಯಸ್ಸು (ಎಸ್.ಎಸ್.ಎಲ್.ಸಿ. ಅಂಕ ಪಟ್ಟಿ / ವರ್ಗಾವಣೆ ಪತ್ರ) ದೃಢೀಕರಿಸಿ ಲಗತ್ತಿಸತಕ್ಕದ್ದು. | ಅ. ಜನ್ಮ ದಿನಾಂಕ<br>ದಿನಾಂಕ ತಿಂಗಳು ವರ್ಷ<br><br>ಅ. ವಯಸ್ಸು<br>ಆ. ಹುಟ್ಟಿದ ಸ್ಥಳ<br>ಇ. ತಾಲೂಕು<br>ಈ. ಜಿಲ್ಲೆ<br>ಉ. ರಾಜ್ಯ |
| 7 | ಅಭ್ಯರ್ಥಿಯ ಲಿಂಗ | ಗಂಡು / ಹೆಣ್ಣು<br>ವಿವಾಹಿತರೇ/ಅವಿವಾಹಿತರೇ |

| | | | | | |
|---|---|---|---|---|---|
| 8 | **ಮೀಸಲಾತಿ:** ಗ್ರಾಮೀಣ/ಕನ್ನಡ ಮಾಧ್ಯಮ/ಮಾಜಿ ಸೈನಿಕ/ಯೋಜನಾ ನಿರಾಶ್ರಿತರು/ಅಂಗವಿಕಲರೇ/ ಮಹಿಳಾ ವಿಧವೆಯರೇ* | | | | |
| 9 | ವಿದ್ಯಾರ್ಹತೆ: | | | | |
| | ವ್ಯಾಸಂಗ ಮಾಡಿದ ತರಗತಿ | ವ್ಯಾಸಂಗ ಮಾಡಿದ ಶಾಲೆಯ/ಸಂಸ್ಥೆಯ ಹೆಸರು | ಗರಿಷ್ಠ ಅಂಕಗಳು | ಪಡೆದ ಅಂಕಗಳು | ಶೇಕಡಾ ವಾರು |
| 10 | ಅರ್ಜಿ ಶುಲ್ಕ | ಪ.ಜಾ/ಪ.ಪಂ/ಮಾಜಿ ಸೈನಿಕರು/ಪ್ರವರ್ಗ–1 | ಇತರೆ | | |
| 11 | ಶುಲ್ಕ ಸಂದಾಯಿಸಿದ ವಿವರ (ಪ.ಜಾ/ಪ.ಪಂ./ಪ್ರ.ವರ್ಗ–1/ ಮಾಜಿಸೈನಿಕರಿಗೆ ರೂ.100/–, ಇತರರಿಗೆ ರೂ.200/–) | ಡಿ.ಡಿ.ನಂ. ದಿನಾಂಕ | ಮೊತ್ತ | ಬ್ಯಾಂಕ್ ಶಾಖೆ ಹೆಸರು | |
| 12 | ನೀವು ಸರ್ಕಾರಿ/ ಅರೆ ಸರ್ಕಾರಿ ನೌಕರಿಯಲ್ಲಿದ್ದೀರಾ?<br>ಅ) ಇಲಾಖೆಯ ಹೆಸರು<br>ಆ) ಹೊಂದಿರುವ ಹುದ್ದೆಯ ಪದನಾಮ<br>ಇ) ಸೇವಾ ಅವಧಿ<br>ಈ) ವೇತನ ಶ್ರೇಣಿ<br>ಉ) ತಾತ್ಕಾಲಿಕ/ಖಾಯಂ | | | | |
| 13 | ಅರ್ಜಿಯ ಜೊತೆಯಲ್ಲಿ ಲಗತ್ತಿಸಿದ ದಾಖಲೆಗಳ ಪತ್ರಗಳ ವಿವರ | | | | |

ಅರ್ಜಿಯಲ್ಲಿ ತಿಳಿಸಿರುವ ಎಲ್ಲಾ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದೆ ಎಂದು ಹಾಗೂ ಸರಕಾರಿ ಉದ್ಯೋಗ ಸೇರಲು ಅನರ್ಹರಾಗುವಂತಹ ಪೂರ್ವೋತ್ತರಗಳು ಇರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ:

ದಿನಾಂಕ: ಅಭ್ಯರ್ಥಿಯ ಸಹಿ.

**ಸೂಚನೆಗಳು:–**

1. ಅರ್ಜಿಯಲ್ಲಿ ಕೇಳಿರುವ ವಿವರಗಳನ್ನು ಅಭ್ಯರ್ಥಿಯು ಸ್ವಂತ ಬರಹದಲ್ಲಿ ಭರ್ತಿ ಮಾಡತಕ್ಕದ್ದು.
2. ಅಗತ್ಯವಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕರಣ ಪತ್ರಗಳನ್ನು ಕಡ್ಡಾಯವಾಗಿ ಲಗತ್ತಿಸಬೇಕು.
3. ಅಪೂರ್ಣ ಮಾಹಿತಿ ಹಾಗೂ ಅಗತ್ಯ ಪ್ರಮಾಣ ಪತ್ರಗಳನ್ನು ಲಗತ್ತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಈ ಸಂಬಂಧ ಯಾವುದೇ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.

*ಚಾಲ್ತಿಯಲ್ಲಿರುವ ಸರಕಾರಿ ಆದೇಶದಂತೆ ಸಂಬಂಧಪಟ್ಟ ಪ್ರಾಧಿಕಾರದಿಂದ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದೊಳಗೆ ಪಡೆದ ಪ್ರಮಾಣಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸುವುದು.

**ರಾಜ್ಯ ಸರಕಾರಿ/ಕೇಂದ್ರ ಸರಕಾರಿ ನೌಕರರು ಒದಗಿಸಬೇಕಾದ ಪ್ರಮಾಣ ಪತ್ರ.**

ಶ್ರೀ/ಶ್ರೀಮತಿ:–. . . . . . . . . . . . . . . . . . ... .. . . . . . . . . . . . . . . .ರವರು ರಾಜ್ಯ/ಕೇಂದ್ರ ಸರಕಾರದಲ್ಲಿ. . . . . . . . . . . .(ಪದನಾಮ). . . . . . . . . . . . . . . . . . ಇಲಾಖೆಯಲ್ಲಿ ಖಾಯಂ/ತಾತ್ಕಾಲಿಕ ಹುದ್ದೆಯನ್ನು ದಿನಾಂಕ:. . . . . . . . . . . . . . .ವರೆಗೆ ಹೊಂದಿರುವವರು ಈ ಹುದ್ದೆಗೆ ಇವರು ನೇಮಕಾತಿ ನಿಯಮಗಳಡಿ ಆಯ್ಕೆಯಾಗಿದ್ದು, ಸದರಿ ಹುದ್ದೆಗೆ ಅರ್ಜಿ ಸಲ್ಲಿಸಲು ಅವರಿಗೆ ಅನುಮತಿ ನೀಡಲಾಗಿದೆ.

ಸ್ಥಳ:

ದಿನಾಂಕ: ನೇಮಕಾತಿ ಪ್ರಾಧಿಕಾರದ ಸಹಿ

ಪಿ.ಆರ್. 835 ಇಲಾಖೆಯ ಹೆಸರು ಮತ್ತು ಮೊಹರಿನೊಂದಿಗೆ

**ಜಿಲ್ಲಾಧಿಕಾರಿಯವರ ಕಾರ್ಯಾಲಯ, ಮೈಸೂರು ಜಿಲ್ಲೆ, ಮೈಸೂರು**

**ದೂರವಾಣಿ ಸಂ:0821–2424079 ಫ್ಯಾಕ್ಸ್ ಸಂ:2429012 & 2428383**

**e.mail : deo.mysore@gmail.com.dcmys-ka@nic.in**

**ಅಧಿಸೂಚನೆ**

**ಸಂ:ಗ್ರಾಲೆಪಿ.101/2008–2009, ದಿನಾಂಕ: 29ನೇ ಸೆಪ್ಟೆಂಬರ್ 2009**

**ವಿಷಯ:** ಮೈಸೂರು ಜಿಲ್ಲಾ, ಕಂದಾಯ ಘಟಕದ, ಭೂಮಿ ಕೇಂದ್ರಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಸುತ್ತೋಲೆ ಸಂ: ಕಂಇ.34.ಪ್ರಕಾ/2009 ದಿ: 26–9–2009

2.ಈ ಕಾರ್ಯಾಲಯ ಸಮಸಂಖ್ಯೆ ಅಧಿಸೂಚನೆ ದಿನಾಂಕ. 26–9–2009

ಸರ್ಕಾರದ ಉಲ್ಲೇಖ (1)ರ ಸುತ್ತೋಲೆಯನ್ವಯ, ಮೈಸೂರು ಜಿಲ್ಲಾ ಕಂದಾಯ ಘಟಕದ ತಾಲ್ಲೂಕು ಕಛೇರಿಯ ಭೂಮಿ ಕೇಂದ್ರಗಳಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಉಲ್ಲೇಖ (2)ರ ಈ ಕಾರ್ಯಾಲಯದ ಅಧಿಸೂಚನೆಯನ್ನು, ಕೆಳಕಂಡಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

1 ಅಭ್ಯರ್ಥಿಗಳು ಅರ್ಜಿಗಳನ್ನು on line / ಅಂಚೆ / ಖುದ್ದಾಗಿ ಸಲ್ಲಿಸಬಹುದು

2 on line ಮೂಲಕ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳು ಚಲನ್‌ನ ಮುದ್ರಿತ ಪ್ರತಿಯನ್ನು ತೆಗೆದುಕೊಂಡು ನಿಗದಿಪಡಿಸಿದ ಬ್ಯಾಂಕ್‌ನಲ್ಲಿ ನಿಗದಿತ ಶುಲ್ಕವನ್ನು ಪಾವತಿಸಿ ಸ್ವೀಕೃತಿಯನ್ನು ಪಡೆಯತಕ್ಕದ್ದು.

3 ಅಂಚೆ ಮೂಲಕ ಅಥವಾ ಖುದ್ದಾಗಿ ಅರ್ಜಿ ಸಲ್ಲಿಸಲಿಚ್ಛಿಸುವ ಅಭ್ಯರ್ಥಿಗಳು ಈ ಕಾರ್ಯಾಲಯದ ಉಲ್ಲೇಖ (2)ರ ಅಧಿಸೂಚನೆಯಲ್ಲಿ ಸೂಚಿಸಿರುವ ಎಲ್ಲಾ ದಾಖಲಾತಿಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸತಕ್ಕದ್ದು.

4 ಅಂಚೆ ಮೂಲಕ ಅಥವಾ ಖುದ್ದಾಗಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿಗದಿಪಡಿಸಿದ ದಿನಾಂಕದೊಳಗಾಗಿ ಅಥವಾ ಅದಕ್ಕೂ ಮುಂಚಿತವಾಗಿ, ಅಧ್ಯಕ್ಷರು, ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿ ನಂತರ ಬಂದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.

5 ಅಂಚೆ ಅಥವಾ ಖುದ್ದಾಗಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿ ನಮೂನೆಯನ್ನು on line ವಿಳಾಸದಿಂದ http://recruitment.kar.nic.in/mysore-va. ಪಡೆಯಬಹುದಾಗಿದೆ.

6 ಎಲ್ಲಾ ವರ್ಗದ ಮಹಿಳಾ ಅಭ್ಯರ್ಥಿಗಳಿಗೆ ರೂ:100–00 (ಒಂದು ನೂರು)ಗಳ ಶುಲ್ಕ ನಿಗದಿಪಡಿಸಲಾಗಿದೆ.

ಅಧ್ಯಕ್ಷರು,
ಆಯ್ಕೆ ಪ್ರಾಧಿಕಾರ ಹಾಗೂ ನೇಮಕಾತಿ ಪ್ರಾಧಿಕಾರ
ಮತ್ತು ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು

ಪಿ.ಆರ್. 836

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಹಾವೇರಿ**

**ಅಧಿಸೂಚನೆ**

**ನಂ: ಸಿಬ್ಬಂದಿ(1) ವಹಿ–52: 2009–10, ಹಾವೇರಿ, ದಿನಾಂಕ: 26ನೇ ಸೆಪ್ಟೆಂಬರ್ 2009**

**ವಿಷಯ:** ಹಾವೇರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ನಂ:ಆರ್‌ಡಿ: 299: ಬಿಎಸ್‌ಸಿ: 2006: ದಿನಾಂಕ: 3–2–2009 ಮತ್ತು 24–7–2009.

2. ಸರ್ಕಾರದ ಅಧಿಸೂಚನೆ ನಂ: ಕಂಇ: 299: ಬಿಎಸ್‌ಸಿ: 2006: ದಿನಾಂಕ: 8–9–2009.

ಹಾವೇರಿ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಗಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಗಿನ ಷರತ್ತುಗಳಿಗೆ ಒಳಪಟ್ಟು ಹೊಸದಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ಕಾರ್ಯಾಲಯದ ಅಧಿಸೂಚನೆ ನಂ: ಸಿಬ್ಬಂದಿ (1) ವಹಿ–100: 2008–09: ದಿನಾಂಕ: 27–2–2009ರ ಕೆಳಗೆ ನೇರ ನೇಮಕಾತಿ ಮಾಡಲು ಕರೆದ ಅರ್ಜಿಗಳ ಪ್ರಕ್ರಿಯೆಯನ್ನು ಸಂಪೂರ್ಣವಾಗಿ ಉಲ್ಲೇಖ (2)ರ ಅಧಿಸೂಚನೆಯನ್ವಯ ರದ್ದುಪಡಿಸಿದೆ.

**1. ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ:**

| **ಹುದ್ದೆಗಳ ಹೆಸರು** | **: ಸಂಖ್ಯೆ** |
|---|---|
| (ಅ) ಗಾಮಲೆಕ್ಕಾಧಿಕಾರಿ. | : 70 |
| (ಬ) ವೇತನ ಶ್ರೇಣಿ | : 5800–100–6000–125–6500–150–7100–175–7800–200 |
| | : 8600–225–9500–250–10500 |

2. **ಹುದ್ದೆಯ ವರ್ಗೀಕರಣ:**

| ಕ್ರ. ಸಂ | ಹುದ್ದೆಯ ಹೆಸರು | ಒಟ್ಟು ಹುದ್ದೆ | ವರ್ಗೀಕರಣ | | | | | | | | |
|---|---|---|---|---|---|---|---|---|---|---|---|
| | | | ಪ್ರವರ್ಗ | ಇತರೆ | ಮಹಿಳಾ | ಗ್ರಾಮೀಣ | ಮಾ. ಸೈ | ಕ.ಮಾ ಅ | ಯೋ ನಿರಾ | ಅಂ. ವಿ. | ಒಟ್ಟು |
| 1. | ಗ್ರಾಮಲೆಕ್ಕಾಧಿಕಾರಿ. | 70 | ಪ.ಜಾ | 4 | 3 | 3 | 1 | 0 | 0 | 0 | 11 |
| | | | ಪ.ಪಂ | 1 | 1 | 0 | 0 | 0 | 0 | 0 | 2 |
| | | | ಪ್ರ–1 | 1 | 1 | 1 | 0 | 0 | 0 | 0 | 3 |
| | | | ಪ್ರ–2(ಎ) | 4 | 3 | 3 | 1 | 0 | 0 | 0 | 11 |
| | | | ಪ್ರ–2(ಬಿ) | 1 | 1 | 1 | 0 | 0 | 0 | 0 | 3 |
| | | | ಪ್ರ–3(ಎ) | 1 | 1 | 0 | 0 | 0 | 0 | 0 | 2 |
| | | | ಪ್ರ–3(ಬಿ) | 1 | 1 | 1 | 0 | 0 | 0 | 0 | 3 |
| | | | ಸಾ.ಅ | 5 | 11 | 9 | 3 | 2 | 1 | 4 | 35 |
| | **ಒಟ್ಟು** | | | **18** | **22** | **18** | **5** | **2** | **1** | **4** | **70** |
| | | ಹುದ್ದೆಗಳ ವರ್ಗೀಕರಣದ ರೋಸ್ಟರಿನ ಪ್ರಾರಂಭಿಕ ಬಿಂದು:1 | | | | | | | | | |

(1) ಮಾ.ಸೈ–ಮಾಜಿ ಸೈನಿಕರು (2) ಕ.ಮಾ.ಅ–ಕನ್ನಡ ಮಾಧ್ಯಮ ಅಭ್ಯರ್ಥಿ (3) ಯೋ.ನಿರಾ–ಯೋಜನಾ ನಿರಾಶ್ರಿತರು (4) ಅಂ.ವಿ–ಅಂಗವಿಕಲರು.

3. **ವಿದ್ಯಾರ್ಹತೆ:** ಕರ್ನಾಟಕ ಪದವಿಪೂರ್ವ ಶಿಕ್ಷಣ ಇಲಾಖೆಯಿಂದ ನಡೆಸುವ P.U.C. ಪರೀಕ್ಷೆಯಲ್ಲಿ ತೇರ್ಗಡೆ ಅಥವಾ C.B.S.E. ನಡೆಸುವ 12ನೇ ತರಗತಿ ಅಥವಾ I.C.S.E. ಯಲ್ಲಿ ತೇರ್ಗಡೆ ಹೊಂದಿರಬೇಕು.

4. **ವಯೋಮಿತಿ:** ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು ಈ ಕೆಳಗಿನಂತೆ ವಯೋಮಿತಿ ಹೊಂದಿರತಕ್ಕದ್ದು.
   (1) ಪ.ಜಾ/ ಪ.ಪಂ/ ಪ್ರ ವರ್ಗ–1 : ಕನಿಷ್ಟ 18, ಗರಿಷ್ಟ 40 ವರ್ಷ
   (2) ಹಿಂದುಳಿದ ವರ್ಗ : ಕನಿಷ್ಟ18, ಗರಿಷ್ಟ 38 ವರ್ಷ
   (3) ಸಾಮಾನ್ಯ ವರ್ಗ. : ಕನಿಷ್ಟ 18, ಗರಿಷ್ಟ 35 ವರ್ಷ

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು, ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಟ ವಯೋಮಿತಿಯನ್ನು ಅವನು/ ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ಪಡೆಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

(ಇ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು.

(ಈ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

5. **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 30–10–2009**

6. **ಅರ್ಜಿ ಶುಲ್ಕ:** 1) ಪರಿಶಿಷ್ಟ ಜಾತಿ/ ಪಂಗಡದ/ ಪ್ರವರ್ಗ–1 ಅಭ್ಯರ್ಥಿಗಳಿಗೆ ರೂ. 100–00
   2) ಇತರೆ ಅಭ್ಯರ್ಥಿಗಳಿಗೆ ರೂ.200–00

7. **ಆಯ್ಕೆ ವಿಧಾನ:** ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬಾರ್ಡಿನೇಟ್ ಬ್ರ್ಯಾಂಚ್) (ವೃಂದ ಮತ್ತು ನೇಮಕಾತಿ (ತಿದ್ದುಪಡಿ) ನಿಯಮಗಳು 2008) ರನ್ವಯ ಅರ್ಹತೆ (ಮೆರಿಟ್) ಆಧಾರದ ಮೇಲೆ ಆಯ್ಕೆಗೆ ಪರಿಗಣಿಸಲಾಗುವುದು.

8. **ಅರ್ಜಿ ನಮೂನೆ ಮತ್ತು ಅರ್ಜಿ ಸಲ್ಲಿಸುವ ವಿಳಾಸ:** ಅಭ್ಯರ್ಥಿಗಳು ಅರ್ಜಿಗಳನ್ನು ಇಲಾಖಾ ವೆಬ್‌ಸೈಟ್ http://recruitment.kar.nic.in/va-haveri ಮುಖಾಂತರ ಆನ್‌ಲೈನ್ ಮೂಲಕ ದಿನಾಂಕ: 30.09.2009 ರಿಂದ ಮಾತ್ರ ಸಲ್ಲಿಸಬೇಕು. ಅಂಚೆ ಮೂಲಕ ಅಥವಾ ಖುದ್ದಾಗಿ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಆನ್‌ಲೈನ್ ಮುಖಾಂತರ

ಅರ್ಜಿ ಸಲ್ಲಿಸಿದ ನಂತರ ಗಣಕಯಂತ್ರದಲ್ಲಿ ಮುದ್ರಿತ ಹಣ ಭರ್ತಿ ಮಾಡುವ ಚಲನ್ ಪಡೆದು ರಾಜ್ಯದ ಯಾವುದೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಅಥವಾ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಬ್ಯಾಂಕ್ ಶಾಖೆಯಲ್ಲಿ ನಿಗದಿತ ಹಣ ಸಂದಾಯ ಮಾಡಬೇಕು. ಆನ್ ಲೈನ್ ಮೂಲಕ ಭರ್ತಿ ಮಾಡಲಾದ ಅರ್ಜಿಯಲ್ಲಿಯ ಮಾಹಿತಿಯ ದಾಖಲೆ ಹಾಗೂ ಈ ಕೆಳಗಿನ ದಾಖಲೆಗಳೊಂದಿಗೆ ತಾತ್ಕಾಲಿಕ ಆಯ್ಕೆಪಟ್ಟಿ ಪ್ರಕಟವಾದ ನಂತರ ಮೂಲ ದಾಖಲೆಗಳೊಂದಿಗೆ ಪರಿಶೀಲನೆಗೆ ಹಾಜರುಪಡಿಸತಕ್ಕದ್ದು.

1. ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ/ ಅಂಕಪಟ್ಟಿ ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ/ ವರ್ಗಾವಣೆಯ ಪ್ರಮಾಣ ಪತ್ರ/ ಜನ್ಮ ದಿನಾಂಕವನ್ನು ತೋರಿಸುವ ಸಂಚಿತ (ಕ್ಯುಮುಲೇಟಿವ್ ರಿಕಾರ್ಡ್) ದಾಖಲೆಯ ಉದ್ಧೃತ ಭಾಗ.
3. ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
4. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಗಳ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
5. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು ನಮೂನೆ–2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7. ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
8. ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
9. ವಿಧವೆಯಾದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
10. ಮೀಸಲಾತಿ ಕೋರಿದ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ, ಅವರು ಮೀಸಲಾತಿಗೆ ಅನರ್ಹರಾಗುತ್ತಾರೆ.

**9. ವಿಶೇಷ ಸೂಚನೆಗಳು:**

1. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ಅಪೂರ್ಣವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಈ ಅಧಿಸೂಚನೆಯನ್ವಯ ಅಭ್ಯರ್ಥಿಗಳು ಆಯ್ಕೆಯಾದಲ್ಲಿ ಅಂಥವರು ಹಾವೇರಿ ಜಿಲ್ಲೆಯ ಯಾವುದೇ ತಾಲೂಕಿನಲ್ಲಿ ಸೇವೆ ಸಲ್ಲಿಸಲು ಬದ್ಧರಾಗಿರಬೇಕು.
4. ಅಭ್ಯರ್ಥಿಗಳು ಆಯ್ಕೆ ಬಗ್ಗೆ ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5. ಪ್ರಕಟಿಸಿರುವ ಹುದ್ದೆಗಳನ್ನು ಹೆಚ್ಚು ಅಥವಾ ಕಡಿಮೆ ಮಾಡುವ ಹಕ್ಕು ಆಯ್ಕೆ ಪ್ರಾಧಿಕಾರಿಗಳಿಗೆ ದತ್ತವಾಗಿರುತ್ತದೆ.
6. ಆಯ್ಕೆ ಪ್ರಾಧಿಕಾರವು ಗ್ರಾಮಲೆಕ್ಕಿಗರ ಹುದ್ದೆಗಳ ಭರ್ತಿ ಮಾಡುವ ವಿಚಾರ ಕುರಿತು ಪೂರ್ಣ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.
7. ಮೇಲಿನ ಹುದ್ದೆಗಳಿಗೆ ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ಆಯ್ಕೆ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು ಹಾವೇರಿ ಇವರು ಕಾಯ್ದಿರಿಸಿಕೊಂಡಿದ್ದಾರೆ.
8. ಸರಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ನೇಮಕ ಪ್ರಾಧಿಕಾರ/ ಇಲಾಖಾ ಮುಖ್ಯಸ್ಥರಿಂದ ನಿಗದಿತ ನಮೂನೆಯಲ್ಲಿ ಹಾಗೂ ಅರ್ಜಿ ಸಲ್ಲಿಸಿದ ದಿನಾಂಕದಂದು ಪ್ರಮಾಣ ಪತ್ರ ಪಡೆದುಕೊಂಡಿರಬೇಕು.
9. ತಪ್ಪು ಮಾಹಿತಿ ಒದಗಿಸಿರುವ ಅಭ್ಯರ್ಥಿಗಳು ಆಯ್ಕೆಗೆ ಅರ್ಹರಿರುವುದಿಲ್ಲ.
10. ಅರ್ಜಿದಾರರೊಡನೆ ಪತ್ರ ವ್ಯವಹಾರಗಳಿಗೆ ಅವಕಾಶವಿರುವುದಿಲ್ಲ.
11. ಯಾವುದೇ ರೀತಿಯ ಒತ್ತಡಗಳನ್ನು ಶಿಫಾರಸ್ಸುಗಳನ್ನು ಮಾಡಿದರೆ ಅಂಥವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
12. ಜಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು, ಮತ್ತು ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
13. ಆಯ್ಕೆಯು ಸರಕಾರದಿಂದ ಕಾಲಕಾಲಕ್ಕೆ ಹೊರಡಿಸುವ ನಿಯಮಗಳಿಗೆ ಒಳಪಟ್ಟಿರುತ್ತದೆ.

**10. ಜಾತಿ/ ಮೀಸಲಾತಿ ಪ್ರಮಾಣ ಪತ್ರಗಳು.** ಮೀಸಲಾತಿ ಸೌಲಭ್ಯ ಅಪೇಕ್ಷಿಸುವ ಅಭ್ಯರ್ಥಿಗಳು ಈ ಕೆಳಕಂಡ ದಾಖಲೆಗಳ ಪ್ರತಿಗಳನ್ನು ಅರ್ಜಿ ಸಲ್ಲಿಸುವ ದಿನಾಂಕದಂದು ಚಾಲ್ತಿಯಲ್ಲಿರುವ ನಿಗದಿತ ನಮೂನೆಯಲ್ಲಿ ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದ ಮೀಸಲಾತಿ) (ತಿದ್ದುಪಡಿ) ನಿಯಮಗಳು 2000ರನ್ವಯ ಸಂಬಂಧಪಟ್ಟ ರೆವಿನ್ಯೂ ಪ್ರಾಧಿಕಾರದಿಂದ ಪಡೆಯಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ, ಆವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು.

- ಪ.ಜಾ/ ಪ.ಪಂ/ ಪ್ರವರ್ಗ–1 : ಸರ್ಕಾರದ ಅಧಿಸೂಚನೆ SWD.132.SAD 97,
  : ದಿ: 8–2–2000 ಕ್ರಮವಾಗಿ ನಮೂನೆ–ಡಿ ಹಾಗೂ–ಇ
- ಪ್ರವರ್ಗ2ಎ, 2ಬಿ, 3ಎ,3ಬಿ : ನಮೂನೆ–ಎಫ್.
  ಮೀಸಲಾತಿ ಪ್ರಮಾಣ ಪತ್ರಗಳು ನಿಗದಿತ ಅವಧಿಯಲ್ಲಿರಬೇಕು.

**11. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು:**

ಸರಕಾರದ ಅಧಿಸೂಚನೆ ನಂ:ಡಿಪಿಎಆರ್:23:ಎಸ್‌ಆರ್‌ಆರ್:99:ದಿ:23–11–2000ರ ಪ್ರಕಾರ ಶೇಕಡ 5 ರಷ್ಟು ಹುದ್ದೆಗಳನ್ನು ಯೋಜನಾ ನಿರಾಶ್ರಿತರ ಗುಂಪಿಗೆ ಮೀಸಲಿಡಲಾಗಿದೆ ಈ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರರವರು ನೀಡಿದ ಪ್ರಮಾಣ ಪತ್ರ ಪಡೆದುಕೊಂಡಿರಬೇಕು.

**12. ಅಂಗವಿಕಲ ಅಭ್ಯರ್ಥಿಗಳು:**

ರಾಜ್ಯದ ಸರಕಾರಿ ಜಿಲ್ಲಾ ಮತ್ತು ತಾಲ್ಲೂಕು ಆಸ್ಪತ್ರೆಗಳಲ್ಲಿರುವ ವೈದ್ಯರು ಅಂಗವಿಕಲರಿಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ನೀಡಲು ಅಧಿಕಾರ ಹೊಂದಿದವರಾಗಿರುತ್ತಾರೆ. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ: 115: ಸೇನೆನಿ: 2005, ದಿನಾಂಕ: 19–11–2005, ರಲ್ಲಿ ನಿಗದಿಪಡಿಸಿರುವ ವೈದ್ಯಕೀಯ ಪ್ರಮಾಣ ಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ ಪಡೆದಿರಬೇಕು ಮತ್ತು ಅಂಗವಿಕಲತೆ ಪ್ರಮಾಣವು ಶೇ.40ಕ್ಕಿಂತ ಕಡಿಮೆ ಇರಬಾರದು. ಈ ಪ್ರಮಾಣ ಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**13. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ, ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿಯವರೆಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ದೃಢೀಕೃತ ಗ್ರಾಮೀಣ ಪತ್ರವನ್ನು ಪಡೆದಿರಬೇಕು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ರ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರರವರಿಂದ ಪಡೆಯಬೇಕು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಹಾಕಿಸಿಕೊಂಡಿರಬೇಕು.

ಗ್ರಾಮೀಣ ಮೀಸಲಾತಿ ಕೋರುವ ಪ.ಜಾ/ಪ.ಪಂ/ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ, ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ.

**14. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 71 ಎಸ್‌ಆರ್‌ಆರ್ 2001, ದಿ:24–10–2002ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977.

1977ರ ನಿಯಮ (9) (1) (ಸಿ)ರ ಅನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲ್‌ರುಜು ಮತ್ತು ಮೊಹರು ಹಾಕಿಸಿಕೊಂಡಿರಬೇಕು.

**15. ಅರ್ಹತಾ ಷರತ್ತುಗಳು:**

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನ್ಯತೆಯಿಂದ ಮುಕ್ತರಾಗಿರಬೇಕು.

(ಇ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ. ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ

**16. ಇತರೇ ಸೂಚನೆಗಳು:**

(1) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.

(2) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ, ಆ ದಿನಾಂಕದ ಮಾರನೆಯ ದಿನವು ಅರ್ಜಿಗಳನ್ನು ಆನ್‌ಲೈನ್ ಮೂಲಕ ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**17. ವಿಶೇಷ ಸೂಚನೆ:**

**ಈ ಕಾರ್ಯಾಲಯದ ಅಧಿಸೂಚನೆ ಸಂಖ್ಯೆ: ಸಿಬ್ಬಂದಿ (1) ವಹಿ–100: 2008–09, ದಿನಾಂಕ: 27–2–2009ರ ಕೆಳಗೆ ಹೊರಡಿಸಿದ ನೇರ ನೇಮಕಾತಿಯ ಅಧಿಸೂಚನೆಯನ್ನು ಸಂಪೂರ್ಣವಾಗಿ ರದ್ದುಪಡಿಸಿದ್ದರಿಂದ ಪುನ: ಹೊಸದಾಗಿ ಅರ್ಜಿಯನ್ನು ಸಲ್ಲಿಸಬೇಕು.**

ಅಧ್ಯಕ್ಷರು,
ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಹಾವೇರಿ.

**Application for the post of Village Accountant**

| | | | | | |
|---|---|---|---|---|---|
| 1 | District opted for appointment /ನೇಮಕಾತಿ ಬಯಸುವ ಜಿಲ್ಲೆಯ ಹೆಸರು* | | | | |
| 2 | Full Name /ಅಭ್ಯರ್ಥಿಯ ಪೂರ್ಣ ಹೆಸರು (as in SSLC/10th Cert.)* | | | | |
| 3 | Mother's Name /ತಾಯಿಯ ಹೆಸರು* | | | | |
| 4 | Father's Name /ತಂದೆಯ ಹೆಸರು* | | | | |
| 5 | Gender /ಲಿಂಗ* | ○❍ Male/ಪುರುಷ | ❍○ Female/ಮಹಿಳೆ | | |
| 6 | Date of Birth /ಜನ್ಮ ದಿನಾಂಕ* | Select Date | / Select Month | / Select Year | |
| 7 | Applied Category /ಕೋರಿರುವ ವರ್ಗ* | ○❍ GM/ಸಾ.ಅ | ○❍SC/ಪ.ಜಾ | ○❍ ST/ಪ.ಪಂ | ○❍ Cat-1/ಪ್ರವರ್ಗ–1 |
| | | ○❍ 2A/2ಎ | ○❍2B/2ಬಿ | ○❍3A/3ಎ | ○❍ 3B/3ಬಿ |
| 8 | Do you come under these groups? /ನೀವು ಈ ಗುಂಪುಗಳಲ್ಲಿ ಬರುವಿರಾ? | □ Rural/ಗ್ರಾಮೀಣ | □ KMS/ಕನ್ನಡ ಮಾಧ್ಯಮ ಅಭ್ಯರ್ಥಿ | | |
| | | □ PDP/ಯೋಜನಾ ನಿರಾಶ್ರಿತ ಅಭ್ಯರ್ಥಿ | □ Ex-Serviceman/ಮಾಜಿ ಸೈನಿಕ | | |
| | | □ PHC/ಅಂಗವಿಕಲ | | | |
| 9 | Are you in Govt.Service? ಸರ್ಕಾರಿ ಸೇವೆಯಲ್ಲಿರುವಿರಾ? | ○❍ Yes/ಹೌದು | ❍○ No/ಇಲ್ಲ | | |
| 10 | Do you claim age relaxation? If yes, select accordingly./ ನೀವು ವಯೋಮಿತಿ ರಿಯಾಯಿತಿ ಕೋರುವಿರಾ?ಹಾಗಿದ್ದಲ್ಲಿ ಸೂಕ್ತ ಚೌಕವನ್ನು ಆಯ್ಕೆ ಮಾಡಿ | □ Widow/ವಿಧವೆ | □ PHC/ಅಂಗವಿಕಲ | | |
| | | □ Ex-Serviceman/ಮಾಜಿ ಸೈನಿಕ | | | |
| 11 | Address for communication/ಪೂರ್ಣ ವಿಳಾಸ* | 13 | Email address/ ಇ – ಮೇಲ್ ವಿಳಾಸ | | |
| 12 | District Pin/ಪಿನ್ | 14 | Phone/ಫೋನ್ ನಂ | | |
| | | 15 | Mobile No/ ಮೊಬೈಲ್ ನಂ | | |
| 16 | Qualifying Exam Passed?* | ○❍ PUC/ಪಿ.ಯು.ಸಿ | ❍○ CBSE/ICSE ಸಿ.ಬಿ.ಎಸ್.ಇ/ಐ.ಸಿ.ಎಸ್.ಇ | | |
| 17 | Marks Obtained in PUC/10+2 (ಪಿ.ಯು.ಸಿ/10+2ರಲ್ಲಿ ಗಳಿಸಿದ ಅಂಕಗಳು)* | | | | |
| 18 | Maximum Marks / ಗರಿಷ್ಠ ಅಂಕಗಳು* | | | | |

**ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ – 576101**

**ಅಧಿಸೂಚನೆ**

**ಇಎಸ್‌ಟಿ.ಸಿಆರ್. 162/2008–09, ದಿನಾಂಕ: 26ನೇ ಸೆಪ್ಟೆಂಬರ್ 2009**

ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯ ಉಡುಪಿ ಜಿಲ್ಲಾ ಘಟಕದಲ್ಲಿ ಬರುವ ತಾಲ್ಲೂಕುಗಳಲ್ಲಿ ಖಾಲಿ ಇರುವ ಹಾಗೂ ತಾಲ್ಲೂಕು ಕಛೇರಿಗಳಲ್ಲಿನ ಭೂಮಿ ಕೇಂದ್ರಗಳಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬೊರ್ಡಿನೇಟ್ ಬ್ರಾಂಚ್) (ಕೇಡರ್ ಎಂಡ್ ರಿಕ್ರ್ಯೂಟ್‌ಮೆಂಟ್) (ತಿದ್ದುಪಡಿ) ನಿಯಮಗಳು 2008 ಮತ್ತು 2009ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299/ಬಿಎಸ್ ಸಿ 2006 ದಿನಾಂಕ: 8.9.2009ರಲ್ಲಿ ನೀಡಿದ ನಿರ್ದೇಶನಗಳಂತೆ ನೇರನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಗ್ರಾಮಲೆಕ್ಕಿಗರ ಖಾಲಿ ಇರುವ ಹುದ್ದೆಗಳ ವಿವರಗಳು ಈ ಕೆಳಗಿನಂತಿವೆ.

**ಹುದೆಗಳ ವರ್ಗೀಕರಣ:** (ರೋಸ್ಟರ್ ಬಿಂದು 1 ರಿಂದ 76 ರ ವರೆಗೆ)

| ಕ್ರ. ಸಂ. | ವರ್ಗೀಕರಣದ ವಿವರ | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕರು | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪರಿಶಿಷ್ಟ ಜಾತಿ | 3 | 4 | 3 | 1 | 1 | – | – | 12 |
| 2 | ಪರಿಶಿಷ್ಟ ಪಂಗಡ | 1 | 1 | 1 | 0 | – | – | – | 3 |
| 3 | ಪ್ರ.ವರ್ಗ–I | 1 | 1 | 1 | 0 | – | – | – | 3 |
| 4 | ಪ್ರ.ವರ್ಗ– IIA | 3 | 3 | 3 | 1 | 1 | – | – | 11 |
| 5 | ಪ್ರ.ವರ್ಗ– IIB | 1 | 1 | 1 | – | – | – | – | 3 |
| 6 | ಪ್ರ.ವರ್ಗ– IIIA | 1 | 1 | 1 | – | – | – | – | 3 |
| 7 | ಪ್ರ.ವರ್ಗ– IIIB | 1 | 1 | 1 | – | – | – | – | 3 |
| 8 | ಸಾಮಾನ್ಯ ಅರ್ಹತೆ | 7 | 12 | 10 | 2 | 3 | 2 | 2 | 38 |
| | **ಒಟ್ಟು** | **18** | **24** | **21** | **4** | **5** | **2** | **2** | **76** |

**ವೇತನ ಶ್ರೇಣಿ:** ರೂ.5800–100–6000–125–6500–150–7100–175–7800–200–8600–225–9500–250–10500

**ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 30.10.2009ರಂದು ಈ ಕೆಳಗಿನಂತೆ ವಯೋಮಿತಿ ಹೊಂದಿರತಕ್ಕದ್ದು.

| | ಕನಿಷ್ಟ | ಗರಿಷ್ಟ |
|---|---|---|
| ಪ.ಜಾ/.ಪಪಂ/ಪ್ರ–1 | 18 | 40 |
| 2ಎ, 2ಬಿ, 3ಎ, 3ಬಿ | 18 | 38 |
| ಸಾಮಾನ್ಯ ವರ್ಗ | 18 | 35 |

**ಶೈಕ್ಷಣಿಕ ವಿದ್ಯಾರ್ಹತೆ:**

ಪಿ.ಯು.ಸಿ. ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೇಯಲ್ಲಿ ತೇರ್ಗಡೆ ಹೊಂದಿರಬೇಕು.

**ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: 30.10.2009**

**ಅರ್ಜಿ ಶುಲ್ಕ:**

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಾಗೂ ಪ್ರವರ್ಗ–1 | ರೂ. 100=00 |
| ಸಾಮಾನ್ಯ ವರ್ಗ, 2ಎ, 2ಬಿ, 3ಎ, 3ಬಿ ವರ್ಗಕ್ಕೆ | ರೂ. 200=00 |

**ಅರ್ಜಿ ಸಲ್ಲಿಸುವ ವಿಧಾನ:**

ಅರ್ಜಿಗಳನ್ನು ಆನ್–ಲೈನ್ (online) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ. ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್‌ಸೈಟ್ http://dcofficeudupi.org/udupi-va ತೆರೆದು ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅಭ್ಯರ್ಥಿಯು Submit Button ಅನ್ನು ಒತ್ತಿದರೆ ಅರ್ಜಿ ಸಂಖ್ಯೆ (Reference Number) ಸೃಷ್ಟಿಯಾಗುತ್ತದೆ. ಆನ್–ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯಥಿಗಳು ಸ್ವೀಕೃತಿ ಪತ್ರ (Acknowledgement slip) ಮತ್ತು ದ್ವಿಪ್ರತಿ ಚಲನ್‌ನ್ನು

ತೆಗೆದುಕೊಳ್ಳತಕ್ಕದ್ದು. ಈ ಚಲನ್‌ನ್ನು ಅರ್ಜಿ ಶುಲ್ಕದೊಂದಿಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಅಥವಾ ವಿಜಯ ಬ್ಯಾಂಕ್ ಅಥವಾ ಕಾರ್ಪೊರೇಶನ್ ಬ್ಯಾಂಕ್‌ನ ಯಾವುದಾದರೂ ಶಾಖೆಯಲ್ಲಿ ಪಾವತಿಸಬೇಕು. ಅಭ್ಯರ್ಥಿಗಳು ಸ್ವೀಕೃತಿ ಸ್ಲಿಪ್‌ನ್ನು ಮತ್ತು ಚಲನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್ ಬಳಿ ಇರುತ್ತದೆ. ಈ ದಾಖಲೆಗಳನ್ನು ಪರಿಶೀಲನೆಗೆ ನಿಗದಿಪಡಿಸಿದ ದಿನಾಂಕದಂದು (15–12–2009) ಹಾಜರುಪಡಿಸತಕ್ಕದ್ದು. ಬ್ಯಾಂಕಿನಲ್ಲಿ ನಿಗದಿತ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ: 03.11.2009 ಆಗಿರುತ್ತದೆ.

ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯ ದಿನಾಂಕ 26.9.2009ರ ಅಧಿಸೂಚನೆಯನ್ನು ಜಿಲ್ಲಾಧಿಕಾರಿಯವರ ಕಛೇರಿ ಸಹಾಯಕ ಕಮೀಷನರರ ಕಛೇರಿ ಹಾಗೂ ಜಿಲ್ಲೆಯ ಎಲ್ಲಾ ತಾಲ್ಲೂಕು ತಹಶೀಲ್ದಾರರ ನೋಟೀಸು ಬೋರ್ಡಿನಲ್ಲಿ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದ್ದು ನೋಡಬಹುದಾಗಿದೆ. ಅಲ್ಲದೆ ಕಚೇರಿಯ ಅಧಿಕೃತ ವೆಬ್ ಸೈಟಿನಲ್ಲಿ ನೀಡಿರುವ ಮಾಹಿತಿ ಸೂಚಿಯನ್ನು ಪರಿಶೀಲಿಸಬಹುದಾಗಿದೆ. ಸಂಪರ್ಕಿಸಬಹುದಾದ ದೂರವಾಣಿ ಸಂಖ್ಯೆ: 0820–2524924

**ಪಿ. ಹೇಮಲತಾ**
ಅಧ್ಯಕ್ಷರು,
ಗ್ರಾಮಲೆಕ್ಕಿಗರ ನೇರನೇಮಕಾತಿ ಆಯ್ಕೆ ಪ್ರಾಧಿಕಾರ
ಮತ್ತು ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ

**ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ**

**ತಿದ್ದುಪಡಿ**

**ನಂ: ಇಎಸ್ ಟಿ ಸಿಆರ್ 162/08–09, ದಿನಾಂಕ: 30ನೇ ಸೆಪ್ಟೆಂಬರ್ 2009**

ಈ ಕಛೇರಿಯ ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಬಗ್ಗೆ ಹೊರಡಿಸಿದ್ದ ಅಧಿಸೂಚನೆ ಸಂಖ್ಯೆ: ಇಎಸ್‌ಟಿ ಸಿಆರ್ 162/08–09 ದಿನಾಂಕ: 26.09.2009ರ ಪ್ರಕಟಣೆಯಲ್ಲಿ ಕೆಳಕಂಡ ತಿದ್ದುಪಡಿಗಳನ್ನು ಸರ್ಕಾರದ ಆದೇಶಗಳ ಅನ್ವಯ ಮಾರ್ಪಡಿಸಿದ್ದು ಅದರಂತೆ ಓದಿಕೊಳ್ಳುವುದು.

1. ಅರ್ಜಿಗಳನ್ನು ಎಲೆಕ್ಟ್ರಾನಿಕ್ ಮಾರ್ಗ (Online) ಅಥವಾ ಖುದ್ದು ಅಥವಾ ಅಂಚೆ ಮೂಲಕವೂ ಸ್ವೀಕರಿಸಲಾಗುವುದು.

2. ನಿಗದಿತ ಶುಲ್ಕ, ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಮಹಿಳಾ ಅಭ್ಯರ್ಥಿಗಳಿಗೆ ರೂ.100 ಮಾತ್ರ ಹಾಗೂ ಇತರರಿಗೆ ರೂ. 200 ಮಾತ್ರ.

3. "ಖುದ್ದು / ಅಂಚೆ" ಮೂಲಕ ಅರ್ಜಿ ಸಲ್ಲಿಸುವರು ಕೆಳಕಂಡ ವೆಬ್ ಸೈಟ್ ನಲ್ಲಿ "ಅರ್ಜಿ ನಮೂನೆಗಳನ್ನು" ಡೌನ್ ಲೋಡ್ ಮಾಡಿ ಪಡೆಯಬಹುದಾಗಿದೆ. ಕಛೇರಿಯಲ್ಲಿ ಫಾರಂ ನೀಡಲಾಗುವುದಿಲ್ಲ. ಅರ್ಜಿ ಜೊತೆ ನಿಗದಿತ ಶುಲ್ಕವನ್ನು Chairman Village Accountant Recruitment authority and Deputy Commissioner Udupi. ಇವರಿಗೆ ಪಾವತಿ ಮಾಡುವಂತೆ ಡಿ.ಡಿ. ಜೊತೆ ಸಲ್ಲಿಸಬೇಕು. ಅರ್ಜಿಗೆ ಭಾವ ಚಿತ್ರ ಅಂಟಿಸಬೇಕು. ಯಾವುದೇ ಪ್ರಮಾಣ ಪತ್ರವನ್ನು ಅರ್ಜಿ ಜೊತೆ ಸಲ್ಲಿಸಬಾರದು. ವೆಬ್‌ಸೈಟ್ ವಿಳಾಸ

1. dcofficeudupi.org/udupi-va
2. zudupi.net/udupi-va
3. 59.90.15.B4/udupi-va

4. Online ನಲ್ಲಿ ಅರ್ಜಿ ಸಲ್ಲಿಸುವರು ಚಲನನ್ನು ಪಡೆದ ನಂತರ 1 ವಿಜಯ ಬ್ಯಾಂಕ್ 2 ಸಿಂಡಿಕೇಟ್ ಬ್ಯಾಂಕ್‌ನಲ್ಲಿ ನಿಗದಿತ ಶುಲ್ಕ ಪಾವತಿಸಬೇಕು. Online ಅರ್ಜಿ ಸಲ್ಲಿಸುವರು ಮೇಲೆ ಹೇಳಿದ ವೆಬ್‌ಸೈಟ್ ನಲ್ಲಿ ಅರ್ಜಿ ತುಂಬಬಹುದು.

5. ಹೆಚ್ಚಿನ ಮಾಹಿತಿಗೆ ಮೇಲೆ ತಿಳಿಸಿದ ವೆಬ್‌ಸೈಟ್‌ನಲ್ಲಿ ಇರುವ "ಹೆಚ್ಚುವರಿ ಮಾಹಿತಿ" ಯಿಂದ ತಿಳಿದುಕೊಳ್ಳಬಹುದು.

ಅಧ್ಯಕ್ಷರು, ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ
ಜಿಲ್ಲಾಧಿಕಾರಿ, ಉಡುಪಿ ಹಾಗೂ ಜಿಲ್ಲಾಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ

ಪಿ.ಆರ್. 838

**FORM - IV**

**(See Rule 12)**

**NOTICE**

It is hereby notified that the undersigned has changed his/her name from **KHEERU PANDU LAMANI** to **KHEERU PANDU RATHOD**

P.D. 159

**KHEERU PANDU LAMANI**

**OFFICE OF THE COMMISSIONER, DEPARTMENT OF EMPLOYMENT AND TRAINING,**
**KAUSHALYA BHAWAN, DAIRY CIRCLE, BANNERGHATTA ROAD, BANGALORE-29.**
**No.DET/TRG/COE-PUR/NCB/CR-16/2009- 10, Dated: 25th September 2009**
**Phone No : 080-42663103 Fax No. : 080-42663102**

**INVITATION FOR BIDS (IFB)**

**The Full IFBs are published in the following website: www.emptrg.kar.nic.in/tenders, www.detkarnataka.com/ilp**

**NATIONAL COMPETITIVE BIDDING FOR**
**PROCUREMENT OF EQUIPMENT & MACHINERY for**
**Production & Manufacturing Sector, Fabrication Sector, Automobile Sector, Electrical Sector, Electronics Sector, RAC Sector.**

Date : 24 September 2009
Credit No. : 4319- IN

1. The Government of India has received for a Credit (Credit No. 4319-IN) from the International Development Association in various currencies towards the cost of Vocational Training Improvement Project and it is intended that part of the proceeds of this credit will be applied to eligible payments under the contracts for which these Invitation for Bids are issued.
2. The Commissioner, Directorate of Employment & Training, Bangalore invites sealed bids from eligible bidders for supply of Equipment and Machinery for Production & Manufacturing Sector, Fabrication Sector, Automobile Sector, Electrical Sector, Electronics Sector & RAC Sector. The list of IFBs are listed below:

| IFB Number | Description of Procurement | Deadline for Purchase of Bid Documents | Each Bid Document Price | Deadline for bid submission |
|---|---|---|---|---|
| **1. Production & Manufacturing Sector** | | | | |
| NCB-01 | Tools & Equipments for BBBT Module(32 Items) | 29.10.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 30.10.09 At 2 PM |
| NCB-02 | CNC Machineries & Tool Presetting Device( 3 Items) | | | |
| NCB-03 | Machineries(Lathe , Drilling, Surface Grinding & Milling) | | | |
| NCB-04 | Hydraulic & Pneumatic Trainer | | | |
| NCB-05 | PLC Equipments | | | |
| **2. Fabrication Sector** | | | | |
| NCB-06 | Tools & Equipments for BBBT Module(46 Items) | 29.10.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 30.10.09 At 2 PM |
| NCB-07 | Tools & Equipments for Advance Module(18 Items) | | | |
| NCB-08 | Tools & Equipments for Advance Module (52 Items) | | | |

| IFB Number | Description of Procurement | Deadline for Purchase of Bid Documents | Each Bid Document Price | Deadline for bid submission |
|---|---|---|---|---|
| **3. Automobile Sector** | | | | |
| NCB-09 | Tools & Equipments for BBBT Module (55 Items) | 30.10.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 31.10.09 At 2 PM |
| NCB-10 | Tools & Equipments for Advance Module(50 Items) | | | |
| **4. Electrical Sector** | | | | |
| NCB-11 | Tools & Equipments for BBBT Module(37 Items) | 30.09.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 31.10.09 At 2 PM |
| NCB-12 | Tools & Equipments for Advance Module(18 Items) | | | |
| **5. Electronics Sector** | | | | |
| NCB-13 | Tools & Equipments for BBBT Module (33 Items) | 30.10.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 31.10.09 At 2 PM |
| NCB-14 | Tools & Equipments for Advance Module(39 Items) | | | |
| **6. RAC Sector** | | | | |
| NCB-15 | Tools & Equipments for BBBT Module (52 Items) | 30.10.09 At 2 PM | Rs. 2250/- (Inclusive of 12.5% VAT) + Postal charges (Rs 150 for Inland & Rs 500 for Overseas) | 31.10.09 At 2 PM |
| NCB-16 | Tools & Equipments for Advance Module (20 Items) | | | |

3. Interested eligible Bidders may obtain further information and inspect the bidding documents at the **SPIU , Directorate of Employment and Training, Kausalya Bhavan, Dairy Circle, Bangalore-560 029. Karnataka, India from 29.09.2009 onwards** in office time.
4. A complete set of bidding documents may be purchased by any interested eligible bidder on the submission of a written application to the above office and upon payment of a non-refundable fee as indicated above in the form of a Demand Draft/Cashier's cheque/Certified cheque of Nationalised / Scheduled Bank in favour of **Administrative Assistant**, Directorate of Employment and Training, payable at Bangalore.
5. For detailed IFB and for further details refer to the department websites www.emptrg.kar.nic.in/tenders, www.detkarnataka.com/ilp.
6. Bids will be opened in the presence of Bidders' representatives who choose to attend on the specified date and time.

Joint Director (Trg)
for Commissioner Employment & Training.

P.R. 812

## ತೋಟಗಾರಿಕೆ ಇಲಾಖೆ
## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು
## ಟೆಂಡರ್ ಪ್ರಕಟಣೆ

**ಸಂಖ್ಯೆ:ತೋಉನಿ/ಕಉ/ ಸುಕಉಪ್ರ/11/2009–10, ದಿನಾಂಕ: 22ನೇ ಸೆಪ್ಟೆಂಬರ್ 2009**

ಕಬ್ಬನ್ ಉದ್ಯಾನವನದ ನರ್ಸರಿ ವಿಭಾಗದಲ್ಲಿ ಇರುವ ನೆರಳು ಉದ್ಯಾನವನ ವಿಸ್ತರಣೆ ಹಾಗೂ ಹುಲ್ಲುಹಾಸು ಉದ್ಯಾನವನ ನಿರ್ಮಾಣ ಮಾಡಲು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಭೂದೃಶ್ಯ ವಿಭಾಗ ಲಾಲ್‌ಬಾಗ್, ಬೆಂಗಳೂರು ರವರ ಅಂದಾಜು ಪಟ್ಟಿ ರೀತಿ ನಿರ್ಮಾಣ ಮಾಡಬೇಕಾಗಿರುತ್ತದೆ. ಈ ಬಗ್ಗೆ ಅಧಿಕೃತ ಸಂಸ್ಥೆ / ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಇಚ್ಚಿಸುವರು ಈ ಕೆಳಗೆ ತಿಳಿಸಿದ ವಿವರಗಳ ರೀತಿ ಟೆಂಡರ್‌ಗಳನ್ನು ದಿನಾಂಕ:26–10–2009 ರಿಂದ 28–10–2009ರ ಸಂಜೆ 5.00 ಗಂಟೆವರೆಗೆ ಈ ಕಛೇರಿಯಿಂದ ಪಡೆಯಬಹುದು.

**ಭೂದೃಶ್ಯ ಕಾರ್ಯಗಳು**

| | | |
|---|---|---|
| I | **ಸ್ಥಳ ಸ್ವಚ್ಚಗೊಳಿಸುವಿಕೆ / ಕುರುಚಲು ಗಿಡಗಳನ್ನು ತೆಗೆದು ಹಾಕುವುದು.** | |
| | (ಅ). ದಟ್ಟವಾಗಿ ಬೆಳೆದ ಕುರುಚಲು ಗಿಡಗಳನ್ನು ಕತ್ತರಿಸಿ ತೆಗೆದು ಹಾಕುವುದು (0.25 ಮೀ. ದಪ್ಪನಾದ ಗಿಡಗಳು ಸೇರಿದಂತೆ) ಹಾಗೂ ಪೊದೆಗಳನ್ನು ಬೇರು ಸಮೇತ ಕಿತ್ತು ಹಾಕುವುದು<br>1/2X92m X 120m=5520<br>Included for path<br>76X4 = 304= 984<br>150X4 = 660=4536<br>20X4 = 80<br>984 | 4536ಚ.ಮೀ. |
| 2<br>ಎ | **ಹುಲ್ಲು–ಹಾಸು ಅಭಿವೃದ್ಧಿ**<br>**ಮೊದಲ ಅಗೆತ :**<br>ಲಾನ್ ಹಾಕಲು ಮಣ್ಣನ್ನು ಅಗೆಯುವುದು ಸಸ್ಯ ಹುಲ್ಲು ಇತರೆ ಅನಗತ್ಯ ವಸ್ತು ತೆಗೆದು ಹಾಕುವುದು ಹೆಂಟೆ ಒಡೆಯುವುದು ನೀರು ಹಾಕುವುದು ಇತ್ಯಾದಿ. 4536X0.3 | 1360.8 ಘ.ಮೀ |
| ಬಿ. | **ಎರಡನೇ ಅಗೆತ:**<br>ಮಣ್ಣನ್ನು ಅಗೆಯುವುದು ಯಾವುದಾದರೂ ಬೇರು ಹುಲ್ಲು ಇತ್ಯಾದಿ ಇದ್ದರೆ ತೆಗೆದು ಹಾಕುವುದು ಮಣ್ಣನ್ನು ಮಟ್ಟಮಾಡುವುದು ಇತ್ಯಾದಿ | 1360.8 ಘ.ಮೀ |
| ಸಿ. | ಉತ್ತಮ ಗುಣಮಟ್ಟದ ಕೆಂಪು ಮಣ್ಣನ್ನು ಒದಗಿಸಿ ಗುಡ್ಡೆ ಹಾಕುವುದು.<br>4536X0.15 | 680.4 ಘ.ಮೀ |
| ಡಿ | ಮರಳು ಕೊಟ್ಟಿಗೆ ಗೊಬ್ಬರ, ಕೆಂಪು ಮಣ್ಣನ್ನು 1:3:6 ಪ್ರಮಾಣದಲ್ಲಿ ಒದಗಿಸಿ ಗುಡ್ಡೆ ರೂಪದಲ್ಲಿ ಸಂಗ್ರಹಿಸುವುದು. ಬೇಕಾದ ಕಡೆಯಲ್ಲಿ 7.5. ಸೆಂ.ಮೀ. ದಪ್ಪದಲ್ಲಿ ಹರಡುವುದು ಇತ್ಯಾದಿ.<br>ಮರಳು – 4536 X 0.007<br>ಕೊಟ್ಟಿಗೆ ಗೊಬ್ಬರ – 4536 X 0.0225 | 31.75 ಘ.ಮೀ<br>102.0 ಘ.ಮೀ |
| ಇ. | ಈ ಕೆಳಕಂಡ ರಾಸಾಯನಿಕ ಗೊಬ್ಬರ ಸರಬರಾಜು ಮಾಡುವುದು<br>1. ಸೂಪರ್ ಫಾಸ್ಫೇಟ್ ––––– 50 ಗ್ರಾಂ./ಚ.ಮೀ.<br>2. ಬೇವಿನ ಎಣ್ಣೆ ಕೇಕ್ –––– 250 ಗ್ರಾಂ./ಚ.ಮೀ<br>3. ಬೋನ್ ಮೀಲ್––––––– 250ಗ್ರಾಂ./ಚ.ಮೀ<br>4. ಪೊಟ್ಯಾಷ್ ––––––––––––– 50 ಗ್ರಾಂ./ಚ.ಮೀ<br>5. ಪ್ಯೂರಾಡಾನ್ –––––––––– 25 ಗ್ರಾಂ./ಚ.ಮೀ<br>6. ಅಮೋನೀಯಂ ಸಲ್ಫೇಟ್–––––100 ಗ್ರಾಂ./ಚ.ಮೀ | 4536 ಚ.ಮೀ |
| ಎಫ್. | ಉತ್ತಮ ಗುಣಮಟ್ಟದ ಶೇಡ್ ಲಾನ್ ಹುಲ್ಲು ಸರಬರಾಜು ಮಾಡುವುದು | 4536 ಚ.ಮೀ |

| | | |
|---|---|---|
| ಜಿ | **ಕೂಲಿ ದರ :** ಸಾಮಗಿಗಳನ್ನು ನಿಗದಿತ ಪ್ರಮಾಣದಲ್ಲಿ ಮಿಶಣ ಮಾಡಲು, ಹರಡುವುದು, ಗೊಬ್ಬರ/ಔಷಧಿ ಸಿಂಪರಣೆ, ಅಗೆಯುವುದು, ಸಮತಟ್ಟು ಗೊಳಿಸುವುದು, ಒಳ್ಳೆ ಗುಣಮಟ್ಟದ ಲಾನ್ ಹುಲ್ಲಿನಿಂದ ಡಿಬ್ಲಿಂಗ್ ಮಾಡುವುದು. | 4536 ಚ.ಮೀ |
| 3. | ಜಾಗದ ಸಮತಟ್ಟು ಸಾಧಾರಣ ಮಣ್ಣಿನಿಂದ ಪ್ರದೇಶವನ್ನು ಎತ್ತರಿಸಿ ಸಮತಟ್ಟುಗೊಳಿಸುವುದು (ಹೇರುವ, ಇಳಿಸುವ, ಸಾಗಾಣಿಕೆ ವೆಚ್ಚ ಸೇರಿ) (4536 X 0.225). | 1020.0ಘ.ಮೀ |
| 4. | **ಹುಲ್ಲು–ಹಾಸು ನಿರ್ವಹಣೆ:** ನೀರು ಹಾಯಿಸುವುದು, ಕಳೆ ತೆಗೆಯುವುದು – 15 ದಿನಗಳಿಗೊಮ್ಮೆ, ಗೊಬ್ಬರಹಾಕುವುದು, ಸಸ್ಯ ಸಂರಕ್ಷಣಾ ಔಷಧಿಗಳನ್ನು ಸಿಂಪಡಿಸುವುದು. | 2 ತಿಂಗಳು. |

**ಷರತ್ತು ಮತ್ತು ನಿಬಂಧನೆಗಳು:**

| | |
|---|---|
| 1 | ಭದ್ರತಾ ಠೇವಣಿ ರೂ. 35,000/– ಬ್ಯಾಂಕ್ ಡಿಮಾಂಡ್ ಡ್ರಾಫ್ಟನ್ನು ಸದಸ್ಯ ಕಾರ್ಯದರ್ಶಿಗಳು, "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ", ಲಾಲ್‌ಬಾಗ್, ಬೆಂಗಳೂರು ಇವರ ಹೆಸರಿನಲ್ಲಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸಲ್ಲಿಸಬೇಕು |
| 2 | ಮೊಹರಾದ ಟೆಂಡರ್‌ಗಳನ್ನು ದಿನಾಂಕ:29–10–2009 ರಂದು ಸಂಜೆ 4.00 ಗಂಟೆಗೆ ತೆರೆಯಲಾಗುವುದು. |
| 3 | ಟೆಂಡರ್‌ಫಾರಂನ್ನು ದಿನಾಂಕ:26–10–2009 ರಿಂದ 28–10– 2009ರ ವರೆಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ಕಛೇರಿಯಿಂದ ಪಡೆಯಬಹುದು. |
| 4 | ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸ್ವೀಕರಿಸುವ ಕೊನೆಯ ದಿನಾಂಕ:29–10–2009 ರಂದು ಸಂಜೆ 3.00 ಗಂಟೆವರೆಗೆ. |
| 5 | ಟೆಂಡರ್ ಫಾರಂ ಬೆಲೆ ರೂ. 500–00 (ಐದು ನೂರು) ಮಾತ್ರ. |
| 6 | ಟೆಂಡರ್ ಪ್ರಕಟಣೆಯಲ್ಲಿ ತಿಳಿಸಿದ ವಿವರಗಳ ರೀತಿ ಉತ್ತಮ ರೀತಿಯ ಕೆಲಸ ನಿರ್ವಹಿಸಬೇಕು. ಮತ್ತು ಕನಿಷ್ಟ ದರವನ್ನು ನಮೂದಿಸಬೇಕು. |
| 7 | ಟೆಂಡರ್ ಸಲ್ಲಿಸುವಾಗ "ಕಬ್ಬನ್ ಪಾರ್ಕ್ ನರ್ಸರಿಯಲ್ಲಿ ನೆರಳು ಉದ್ಯಾನವನ ನಿರ್ಮಾಣದ ಬಗ್ಗೆ ಟೆಂಡರ್" ಎಂದು ಲಕೋಟೆಯ ಮೇಲೆ ನಿಖರವಾಗಿ ಬರೆದು ಸೀಲು ಮಾಡಿದ ಲಕೋಟೆಯಲ್ಲಿ ನೀಡಬೇಕು. |
| 8 | ಯಶಸ್ವಿ ಟೆಂಡರ್‌ದಾರರಿಂದ ಠೇವಣಿ ಬಿಟ್ಟು ಉಳಿದವರ ಠೇವಣಿಗಳನ್ನು ಟೆಂಡರ್ ಪರಿಶೀಲನೆ ನಂತರ ಕೆ.ಟಿ.ಪಿ.ಪಿ. ಕಾಯ್ದೆಯನ್ವಯ ಹಿಂತಿರುಗಿಸಲಾಗುವುದು, ಯಶಸ್ವಿ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್‌ನಲ್ಲಿ ಸೂಚಿಸಿದ ಕೆಲಸವನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದ ನಂತರ ಬಡ್ಡಿ ರಹಿತವಾಗಿ ಹಿಂತಿರುಗಿಸಲಾಗುವುದು. |
| 9 | ಸರ್ಕಾರದ ನಿಯಮಾವಳಿಯಂತೆ ಅನ್ವಯವಾಗುವ ತೆರಿಗೆಯನ್ನು ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು. ನಿಯಮಾನುಸಾರ ಕಾಲಕಾಲಕ್ಕೆ ಅನ್ವಯವಾಗುವ ತೆರಿಗೆಗಳಿಗೆ ಟೆಂಡರ್‌ದಾರರು ಬದ್ಧರಾಗಿರಬೇಕು. |
| 10 | 2008–2009ನೇ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ದೃಢೀಕರಣ ಪತ್ರಗಳನ್ನು ಲಗತ್ತಿಸಬೇಕು. ರೂ.2.00 ಲಕ್ಷಕ್ಕೆ ಸಾಲ್ವೆನ್ಸಿ ಪತ್ರವನ್ನು ಯಾವುದಾದರೂ ಒಂದು ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಲಗತ್ತಿಸಬೇಕು. |
| 11 | ಸದರಿ ಲ್ಯಾಂಡ್ ಸ್ಕೇಪಿಂಗ್ ಕಾಮಗಾರಿಗಳನ್ನು, 2005–2006, 2006–2007, 2007–2008, 2008–2009ನೇ ಸಾಲಿನಲ್ಲಿ ರೂ.20.00ಲಕ್ಷ ಮೌಲ್ಯಕ್ಕೆ ಕಡಿಮೆಯಾಗದ ಕಾಮಗಾರಿಯನ್ನು ಯಾವುದಾದರೂ ಒಂದು ವರ್ಷದಲ್ಲಿ ಪೂರ್ಣಗೊಳಿಸಿದ ಸಂಬಂಧಪಟ್ಟ ಇಲಾಖೆ / ಇತರೆ ಸರ್ಕಾರಿ ಇಲಾಖೆಗಳಲ್ಲಿ /ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಿಂದ ಪಡೆದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು. |
| 12 | ಟೆಂಡರ್ ಅನುಮೋದಿಸಿದ ಕಾರ್ಯಾದೇಶ ನೀಡಿದ 90 ದಿನಗಳ ಒಳಗೆ ಟೆಂಡರ್ ಪ್ರಕಟಣೆಯಲ್ಲಿ ಸೂಚಿಸಿರುವ ಕೆಲಸಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಮೇಲೆ ಹೇಳಿದ ನಿಬಂಧನೆಗಳನ್ನು ಗುತ್ತಿಗೆದಾರರು ದೃಢೀಕರಿಸುವ / ಕರಾರು ಒಪ್ಪಿಗೆ ಪತ್ರವನ್ನು ರೂ. 200=00 ಬೆಲೆಯ ಸ್ಟಾಂಪ್ ಪೇಪರ್ ಮೇಲೆ ಬರೆದು ಸಹಿ ಮಾಡಿಕೊಡಬೇಕು. |
| 13 | ಯಾವುದೇ ಕಾರಣ ನೀಡದೆ ಟೆಂಡರ್‌ನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಸಂಪೂರ್ಣ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಹೊಂದಿರುತ್ತಾರೆ. |
| 14 | ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು, ರವರ ಕಛೇರಿ ವೇಳೆಯಲ್ಲಿ ಪಡೆಯಬಹುದು. |

ತೋಟಗಾರಿಕೆ ಉಪ ನಿರ್ದೇಶಕರು
ಪಿ.ಆರ್. 827 ಕಬ್ಬನ್ ಉದ್ಯಾನವನ, ಬೆಂಗಳೂರು.

